


# ಕರ್ನಾಟಕ ವಿಧಾನ ಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

## ಚುಕ್ಕೆ ಗುರುತಿನ ಪ್ರಶ್ನೆ

ದಿನಾಂಕ : 29-03-2021 ಪ್ರಶ್ನೆ ಸಂಖ್ಯೆ : 323 (2362)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ನಿರಾಣಿ ಹಣಮಂತ್ ರುದ್ರಪ್ಪ (ಪದವೀಧರರ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 29-03-2021

ಉತ್ತರಿಸುವ ಸಚಿವರು : ಉಪ ಮುಖ್ಯಮಂತ್ರಿಗಳು ಹಾಗೂ ಉನ್ನತ ಶಿಕ್ಷಣ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು

ವಿಷಯ : ಎಸ್.ಸಿ.ವಿ.ಟಿ(S.C.V.T) ವತಿಯಿಂದ ನಡೆಯುತ್ತಿರುವ ಐ.ಟಿ.ಐ (ITI) ಕಾಲೇಜುಗಳ ವಿದ್ಯಾರ್ಥಿಗಳ ಪರೀಕ್ಷಾ ಫಲಿತಾಂಶ ಪ್ರಕಟಿಸುವ ಕುರಿತು

(ಅ) ರಾಜ್ಯದಲ್ಲಿ ಎಸ್.ಸಿ.ವಿ.ಟಿ (S.C.V.T) ವತಿಯಿಂದ ನಡೆಯುತ್ತಿರುವ ಐ.ಟಿ.ಐ ಕಾಲೇಜುಗಳ ಸಂಖ್ಯೆ ಎಷ್ಟು;

(ಆ) ಕಳೆದ ಮೂರು ವರ್ಷಗಳಿಂದ ಎಸ್.ಸಿ.ವಿ.ಟಿ. (S.C.V.T) ವತಿಯಿಂದ ನಡೆಯುತ್ತಿರುವ ಐ.ಟಿ.ಐ ಕಾಲೇಜುಗಳ ವಿದ್ಯಾರ್ಥಿಗಳ ಪರೀಕ್ಷಾ ಫಲಿತಾಂಶ ಪ್ರಕಟಿಸದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಇ) ಹಾಗಿದ್ದಲ್ಲಿ, ಫಲಿತಾಂಶ ವಿಳಂಬವಾಗಲು ಕಾರಣಗಳೇನು;

(ಈ) ಇನ್ನಾದರೂ, ಪರಿಕ್ಷಾ ಫಲಿತಾಂಶಗಳನ್ನು ಆದಷ್ಟು ಬೇಗನೆ ಪ್ರಕಟಿಸಲು ಕ್ರಮಕೈಗೊಳ್ಳಲಾಗುವುದೇ;

(ಉ) ಫಲಿತಾಂಶ ವಿಳಂಬವಾಗಿರುವುದರಿಂದ ವಿದ್ಯಾರ್ಥಿಗಳ ಭವಿಷ್ಯಕ್ಕೆ ತೊಂದರೆಯಾಗಿರುವುದನ್ನು ಸರಿಪಡಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು;

(ಊ) ಯಾವ ಕಾಲಮಿತಿಯಲ್ಲಿ ಸದರಿ ಪರೀಕ್ಷಾ ಫಲಿತಾಂಶಗಳನ್ನು ಪ್ರಕಟಿಸಲಾಗುವುದು?